ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 540
ಸದಸ್ಯರ ಹೆಸರು : ಶ್ರೀ ರಘುನಾಥ್ ರಾವ್ ಮಲ್ಕಾಪೂರೆ (ವಿಧಾನ ಸಭೆಯಿಂದ ಚುನಾಯಿತರಾದವರು)
ಉತ್ತರಿಸುವ ದಿನಾಂಕ : 18-07-2019
ಉತ್ತರಿಸುವ ಸಚಿವರು : ಮಾನ್ಯ ಸಕ್ಕರೆ ಸಚಿವರು

| ಕ್ರಸಂ | ಪ್ರಶ್ನೆ | ಉತ್ತರ |
| --- | --- | --- |
| ಅ) | ಬೀದರ್ ಸಹಕಾರ ಸಕ್ಕರೆ ಕಾರ್ಖಾನೆಗೆ ರಾಜ್ಯ ಸರ್ಕಾರ ಬಿಡುಗಡೆ ಮಾಡಿದ್ದ 20 ಕೋಟಿ ರೂಪಾಯಿಗಳು ಖರ್ಚು ಮಾಡಲಾಗಿದೆಯೇ; ಅಥವಾ ಕಾರ್ಖಾನೆಯ ಖಾತೆಯಲ್ಲಿ ಉಳಿದಿದೆಯೇ; (ಸಂಪೂರ್ಣ ಮಾಹಿತಿ ನೀಡುವುದು) | ಹೌದು, ಸರ್ಕಾರದ ಆದೇಶ ಸಂಖ್ಯೆ ವಾಕೈ 91 ಸಸಕಾ 2018 ದಿನಾಂಕ 05.12.2018 ಮತ್ತು 16.01.2019 ರನ್ವಯ ಬೀದರ್ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಹಳ್ಳಿಖೇಡ್, ಬೀದರ್ ಜಿಲ್ಲೆ ಈ ಕಾರ್ಖಾನೆಯ 2018-19ನೇ ಸಾಲಿನ ಹಂಗಾಮು ಪ್ರಾರಂಭಿಸಲು ದುಡಿಯುವ ಬಂಡವಾಳ ಸಾಲವನ್ನು ಮಂಜೂರು ಮಾಡಿ ಬಿಡುಗಡೆ ಮಾಡಲಾಗಿದೆ.<br><br>ಬೀದರ್ ಸಹಕಾರಿ ಸಕ್ಕರೆ ಕಾರ್ಖಾನೆಗೆ ಸರ್ಕಾರದಿಂದ ನೀಡಲಾಗಿದ್ದ ರೂ.20.00 ಕೋಟಿಗಳ ದುಡಿಯುವ ಬಂಡವಾಳ ಸಾಲವನ್ನು ಸಂಪೂರ್ಣವಾಗಿ ಖರ್ಚು ಮಾಡಲಾಗಿದೆ. ಈ ಸಾಲವನ್ನು ಈ ಕೆಳಕಂಡ ಕಾರ್ಯಗಳಿಗೆ ಖರ್ಚು ಮಾಡಲಾಗಿದೆ. |
| ಆ) | ಖರ್ಚಾಗಿದ್ದಲ್ಲಿ ಯಾವ ಉದ್ದೇಶಕ್ಕಾಗಿ/ ಕಾರ್ಯಕ್ಕಾಗಿ ಈ ಹಣವನ್ನು ಖರ್ಚು ಮಾಡಲಾಗಿದೆ; (ವಿವರ ನೀಡುವುದು) | (see table below) |

| ಕ್ರ. ಸಂ. | ವಿವರ | ಖರ್ಚಾದ ಮೊತ್ತ (ರೂ. ಲಕ್ಷಗಳಲ್ಲಿ) |
| --- | --- | --- |
| 1 | ಯಂತ್ರೋಪಕರಣಗಳ ನಿರ್ವಹಣೆ ಮತ್ತು ಇತರೆ ಸಾಮಾನುಗಳ ಖರೀದಿ | 128.88 |
| 2 | ಕಾರ್ಮಿಕರ ಸಂಬಳ | 205.01 |
| 3 | ಕಬ್ಬು ಕಟಾವು/ ಸಾಗಾಣಿಕೆ ಬಿಲ್ಲು | 348.87 |
| 4 | ವಿದ್ಯುತ್ ಬಿಲ್ಲು | 12.00 |
| 5 | ಕಾರ್ಮಿಕರ ಭವಿಷ್ಯನಿಧಿ | 18.00 |
| 6 | ದಿನಾಂಕ 07.01.2019 ರಿಂದ 17.02.2019 ರವರೆಗೆ ರೈತರ ಕಬ್ಬಿನ ಬಿಲ್ಲಿನ ಪಾವತಿ | 1285.74 |
| 7 | ಕಾರ್ಖಾನೆಯ ಖಾತೆಯಲ್ಲಿ ಉಳಿದಿರುವ ಬಾಕಿ ಹಣ | 1.50 |
| | ಒಟ್ಟು | 2000.00 |

| ಕ್ರಸಂ | ಪ್ರಶ್ನೆ | ಉತ್ತರ |
| --- | --- | --- |
| ಇ) | ಹಣವು ಖರ್ಚಾಗದೆ ಬಾಕಿ ಉಳಿದಿದ್ದಲ್ಲಿ ಉಳಿದಿರುವ ಹಣದಲ್ಲಿ ರೈತರಿಗೆ ಕಬ್ಬಿನ ಬಾಕಿ ಹಣವನ್ನು ಪಾವತಿಸಲು ಸರ್ಕಾರ ಕ್ರಮ ಕೈಗೊಳ್ಳುವುದೇ? (ಮಾಹಿತಿ ನೀಡುವುದು) | ಸರ್ಕಾರದಿಂದ ಕಾರ್ಖಾನೆಗೆ 2018-19ನೇ ಸಾಲಿನಲ್ಲಿ ಬಿಡುಗಡೆ ಮಾಡಿದ್ದ ರೂ.2000.00 ಲಕ್ಷಗಳ ಪೈಕಿ ಮೇಲೆ ತಿಳಿಸಿರುವಂತೆ ರೂ.1998.50 ಲಕ್ಷಗಳನ್ನು ವಿವಿಧ ಬಾಬ್ತುಗಳಿಗೆ ಖರ್ಚು ಮಾಡಲಾಗಿದೆ. ಪ್ರಸಕ್ತ ಕಾರ್ಖಾನೆಯಲ್ಲಿ ರೂ.1.50 ಲಕ್ಷಗಳು ಮಾತ್ರ ಖರ್ಚಾಗದೆ ಬಾಕಿ ಉಳಿದಿರುತ್ತದೆ. ಕಾರ್ಖಾನೆಯು 2018-19ನೇ ಸಾಲಿನಲ್ಲಿ ಕಬ್ಬು ಸರಬರಾಜು ಮಾಡಿದ ರೈತರಿಗೆ ಪಾವತಿಸಬೇಕಾದ ಕಬ್ಬು ಬಿಲ್ಲು ಬಾಕಿ ರೂ.300.00 ಲಕ್ಷಗಳಷ್ಟಿದ್ದು, ಲಭ್ಯವಿರುವ ಹಣದಿಂದ ಈ ಬಾಕಿ ಮೊತ್ತವನ್ನು ತೀರುವಳಿ ಮಾಡಲು ಸಾಧ್ಯವಾಗುವುದಿಲ್ಲ. ಆದರೆ ಕಾರ್ಖಾನೆಯಲ್ಲಿ 5096.800 ಮೆ.ಟನ್ ಸಕ್ಕರೆ ದಾಸ್ತಾನಿದ್ದು, ಇದರ ಮಾರಾಟದ ಮೂಲಕ ರೈತರ ಕಬ್ಬಿನ ಬಾಕಿ ಹಣವನ್ನು ವಸೂಲಾತಿ ಮಾಡಲು ಅನುಕೂಲವಾಗುವಂತೆ ಜಿಲ್ಲಾಧಿಕಾರಿಗಳು, ಬೀದರ್ ಜಿಲ್ಲೆ ಇವರ ಮೂಲಕ ಕಾರ್ಖಾನೆಗೆ ದಿನಾಂಕ 12.06.2019 ರಂದು ವಸೂಲಾತಿ ದೃಢೀಕರಣ ಪತ್ರವನ್ನು ಹೊರಡಿಸಲಾಗಿದೆ. |

ಸಂಖ್ಯೆ: ಸಿಐ 48 ಸಸಕಾ 2019

(ಆರ್.ಬಿ.ತಿಮ್ಮಾಪೂರ)
ಮಾನ್ಯ ಸಕ್ಕರೆ ಸಚಿವರು